

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ಗುರುತಿನ ಪ್ರಶ್ನೆ

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 248 (1836)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

ವಿಷಯ : ನಾಗರೀಕ ಸಹಾಯವಾಣಿ ಕೇಂದ್ರದ ಕುರಿತು

(ಅ) ರಾಜ್ಯದಲ್ಲಿ ನಾಗರೀಕ ಸಹಾಯವಾಣಿ ಕೇಂದ್ರಗಳನ್ನು ಯಾವಾಗ ಮತ್ತು ಎಲ್ಲಿ ಪ್ರಾರಂಭಿಸಲಾಗಿರುತ್ತದೆ ; ಇವುಗಳ ಕಾರ್ಯಗಳು ಯಾವುವು ; ಕಳೆದ ಮೂರು ವರ್ಷಗಳಲ್ಲಿ ಈ ಕೇಂದ್ರಗಳಿಗೆ ಕೇಂದ್ರ ಸರ್ಕಾರದಿಂದ ಮತ್ತು ರಾಜ್ಯ ಸರ್ಕಾರದಿಂದ ಬಿಡುಗಡೆ ಮಾಡಲಾದ ಅನುದಾನವೆಷ್ಟು; (ಜಿಲ್ಲಾವಾರು, ವರ್ಷವಾರು ಮಾಹಿತಿ ಒದಗಿಸುವುದು)

(ಆ) ನಾಗರೀಕರಿಗೆ, ರೋಗಿಗಳಿಗೆ ಮತ್ತು ವೈದ್ಯಕೀಯ ಸಿಬ್ಬಂದಿಗಳೊಂದಿಗೆ ಸಮನ್ವಯ ಸಾದಿಸುವ ಉದ್ದೇಶದಿಂದ ಮಾನವ ಸಂಪನ್ಮೂಲ ಕೇಂದ್ರಿತವಾಗಿರುವ ಈ ಕೇಂದ್ರಗಳನ್ನು ಸ್ಥಗಿತಗೊಳಿಸುವ ಉದ್ದೇಶ ಸರ್ಕಾರದ ಮುಂದಿದೆಯೇ ; ಹೌದಾದಲ್ಲಿ, ಕಾರಣವೇನು; ಈ ಸಹಾಯ ಕೇಂದ್ರದ ಕಾರ್ಯಗಳನ್ನು 104 ಸಹಾಯವಾಣಿಯೊಂದಿಗೆ ವಿಲೀನಗೊಳಿಸಲು ಮತ್ತು ಇ-ಆಸ್ಪತ್ರೆಯಡಿಯಲ್ಲಿ ಅನುಷ್ಠಾನಗೊಳಿಸಲು ಉದ್ದೇಶಿಸಿರುವುದು ನಿಜವೇ;

(ಇ) ಈ ನಾಗರೀಕ ಸಹಾಯ ಕೇಂದ್ರದ ಸ್ಥಾಪನೆಯಿಂದ ಆರೋಗ್ಯ ಕ್ಷೇತ್ರದಲ್ಲಿ ಯಾವ ಪ್ರಯೋಜನಗಳನ್ನು ಗುರುತಿಸಲಾಗಿರುತ್ತದೆ; ಬದಲಿ ವ್ಯವಸ್ಥೆಯಿಂದ ಯಾವ ಹೆಚ್ಚಿನ ಪ್ರಯೋಜನವನ್ನು ಗುರುತಿಸಲಾಗಿದೆ; ರೋಗಿಗಳೊಂದಿಗೆ ಯಾಂತ್ರಿಕತೆಯ ಬದಲಿಗೆ ಮಾನವ ಸಂಪನ್ಮೂಲ ಕೇಂದ್ರಿತವಾಗಿ ಸಮನ್ವಯತೆಯನ್ನು ಹೆಚ್ಚು ಸಮರ್ಪಕವಾಗಿ ನಿರ್ವಹಿಸುವ ನಾಗರೀಕ ಸಹಾಯವಾಣಿ ಕೇಂದ್ರಗಳನ್ನು ಮುಂದವರಿಸಲು ಇರುವ ತೊಡಕುಗಳು ಯಾವುವು; ಇವುಗಳನ್ನು ಮುಂದುವರಿಸಲಾಗುವುದೇ?